

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 228 |
| ಸದಸ್ಯರ ಹೆಸರು | ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 22.09.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯಲ್ಲಿ ನಡೆಯುತ್ತಿ ರುವ ಜಲ್ಲಿ ಕ್ರಷರ್ ಗಳ ಸಂಖ್ಯೆ ಎಷ್ಟು; | ಚಿಕ್ಕಮಗಳೂರು ಜಿಲ್ಲಾ ವ್ಯಾಪ್ತಿಯಲ್ಲಿ ಕರ್ನಾಟಕ ಕಲ್ಲುಪುಡಿ ಘಟಕಗಳ ನಿಯಂತ್ರಣ ಅಧಿನಿಯಮ-2011 ರಂತೆ 37 ಸಂಖ್ಯೆ ಕ್ರಷರ್ ಗಳ ಕಾರ್ಯಾಚರಣೆಗೆ ಲೈಸೆನ್ಸ್ ನೀಡಲಾಗಿರುತ್ತದೆ. |
| ಆ) | ಕಳೆದ 3 ವರ್ಷಗಳಲ್ಲಿ ಈ ಕ್ರಷರ್ ಗಳಿಂದ ಸರ್ಕಾರಕ್ಕೆ ಬಂದಿರುವ ಆದಾಯ ಎಷ್ಟು ; | ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು-1994ರಂತೆ ಕಲ್ಲುಗಣಿ ಗುತ್ತಿಗೆದಾರರು ಗುತ್ತಿಗೆ ಪ್ರದೇಶದಲ್ಲಿ ತೆಗೆದ ಉಪಖನಿಜ ವನ್ನು ಸಾಗಾಣಿಕೆ ಮಾಡುವ ಮುನ್ನ ಸರ್ಕಾರಕ್ಕೆ ಮುಂಗಡ ರಾಜಧನ ಪಾವತಿಸಬೇಕಾಗಿರುತ್ತದೆ.<br>ಕಳೆದ ಮೂರು ವರ್ಷಗಳಿಂದ ಚಿಕ್ಕಮಗಳೂರು ಜಿಲ್ಲಾ ವ್ಯಾಪ್ತಿಯಲ್ಲಿನ ಕಟ್ಟಡ ಕಲ್ಲುಗಣಿ ಗುತ್ತಿಗೆದಾರರಿಂದ ಸಂಗ್ರಹಿಸಿರುವ ರಾಜಧನದ ವಿವರ ಕೆಳಕಂಡಂತಿದೆ:<br>ಕ್ರ.ಸಂ. / ವರ್ಷ / ಸಂಗ್ರಹಿಸಿದ ರಾಜಧನದ ಮೊತ್ತ (ರೂಗಳಲ್ಲಿ)<br>1 / 2017-18 / 4,64,22,538<br>2 / 2018-19 / 4,99,11,379<br>3 / 2019-20 / 7,67,64,844<br>ಒಟ್ಟು / 17,30,98,761<br>ಕ್ರಷರ್ ಘಟಕದ ಮಾಲೀಕರು ನಿಯಮಗಳಂತೆ ರಾಜಧನ ಪಾವತಿಸಬೇಕಾಗಿರುವುದಿಲ್ಲ. ಆದರೆ ಸದರಿಯವರು ಕ್ರಷರ್ ಘಟಕದಲ್ಲಿ ಬಳಕೆ ಮಾಡುವ ಕಚ್ಚಾ ಕಟ್ಟಡ ಕಲ್ಲಿಗೆ ಕಲ್ಲುಗಣಿ ಗುತ್ತಿಗೆದಾರರಿಂದ ರಾಜಧನ ಪಾವತಿಯಾಗಿರುತ್ತದೆ. ಕ್ರಷರ್ ಘಟಕದ ಮಾಲೀಕರು ಕ್ರಷರ್ ಘಟಕದಲ್ಲಿ ಸಂಸ್ಕರಿಸಿದ ಕಟ್ಟಡ ಕಲ್ಲಿನ ಉತ್ಪನ್ನಗಳನ್ನು ಸೆಕೆಂಡರಿ ಖನಿಜ ರವಾನೆ ಪರವಾನಿಗೆ ಪಡೆದು ಸಾಗಾಣಿಕೆ ಮಾಡಬೇಕಾಗಿರುತ್ತದೆ. |
| ಇ) | ಕಳೆದ 3 ವರ್ಷಗಳಲ್ಲಿ ಎಷ್ಟು ಅನಧಿಕೃತ ಕ್ರಷರ್ ಗಳನ್ನು ಪತ್ತೆ ಹಚ್ಚಲಾಗಿದೆ; ಅವುಗಳ ಮೇಲೆ ಯಾವ ಕ್ರಮ ವಹಿಸಲಾಗಿದೆ; | 2017-18 ಮತ್ತು 2018-19ನೇ ಸಾಲಿನಲ್ಲಿ ಸ್ಟೋನ್ ಕ್ರಷರ್ ಸುರಕ್ಷಿತ ವಲಯ ಘೋಷಣೆಯಾದ ನಂತರ ಕ್ರಷರ್ ಮಾಲೀಕರು ಕ್ರಷರ್ ಲೈಸೆನ್ಸ್ ಪಡೆಯದೆ ಕಾರ್ಯಾಚರಣೆ ನಡೆಸುತ್ತಿದ್ದ, ಒಟ್ಟು 31 ಪ್ರಕರಣಗಳನ್ನು ಪತ್ತೆ ಹಚ್ಚಲಾಗಿತ್ತು. ಸದರಿ ಕ್ರಷರ್ ಘಟಕದ ಮಾಲೀಕರಿಗೆ ಸ್ಟೋನ್ ಕ್ರಷರ್ ಕಾಯ್ದೆ-2011 ಮತ್ತು ನಿಯಮ-2012 ರಂತೆ ದಂಡ ವಿಧಿಸಿ ರೂ.49,08,500/- ಗಳನ್ನು ವಸೂಲಿ ಮಾಡಿ ಸರ್ಕಾರಕ್ಕೆ ಜಮೆ ಮಾಡಲಾಗಿರುತ್ತದೆ. ಪ್ರಸ್ತುತ ಸದರಿ ಕ್ರಷರ್‌ಗಳಿಗೆ ಲೈಸೆನ್ಸ್ (ನಮೂನೆ- ಸಿ) ವಿತರಿತಸಿಲಾಗಿರುತ್ತದೆ. |



| | | |
|---|---|---|
| ಈ) | ಹೊಸ ಕಲ್ಲುಗಣಿ ಪರವಾನಿಗೆಗೆ ಬಂದಿರುವ ಅರ್ಜಿಗಳು ಎಷ್ಟು; ಆ ಎಲ್ಲಾ ಅರ್ಜಿಗಳು ವಿಲೇವಾರಿ ಆಗಿವೆಯೇ? (ವಿವರ ನೀಡುವುದು) | ರಾಜ್ಯ ಸರ್ಕಾರವು ದಿನಾಂಕ:12-08-2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು-1994ಕ್ಕೆ ತಿದ್ದುಪಡಿ ತಂದು, ತಿದ್ದುಪಡಿ-2016ರ ನಿಯಮಗಳನ್ನು ಜಾರಿಗೆ ತಂದಿರುತ್ತದೆ. ಸದರಿ ನಿಯಮಗಳ ಪ್ರಕಾರ ಸರ್ಕಾರಿ ಜಮೀನುಗಳಲ್ಲಿ ಉಪಖನಿಜ ಗಣಿ ಗುತ್ತಿಗೆಗಳನ್ನು ಹರಾಜು ಮೂಲಕ ಮಂಜೂರು ಮಾಡಬೇಕಾಗಿರುತ್ತದೆ.<br>ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು-2016 ಜಾರಿಗೆ ಬರುವ ಪೂರ್ವದಲ್ಲಿ ಕಲ್ಲುಗಣಿ ಗುತ್ತಿಗೆ ಕೋರಿದ್ದ 39 ಅರ್ಜಿಗಳು ಬಾಕಿ ಇದ್ದು ಇವುಗಳಲ್ಲಿ 19 ಅರ್ಜಿಗಳಿಗೆ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರಗಳು ಲಭ್ಯವಿಲ್ಲದೆ ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಅನರ್ಹ ಅರ್ಜಿಗಳಾದ ಕಾರಣ ತಿರಸ್ಕರಿಸಲಾಗಿರುತ್ತದೆ. 11 ಅರ್ಜಿಗಳಿಗೆ ಕಲ್ಲುಗಣಿ ಗುತ್ತಿಗೆ ಮಂಜೂರಾತಿ ನೀಡಲಾಗಿರುತ್ತದೆ. ಉಳಿದ 09 ಅರ್ಜಿಗಳು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು-2016 ರನ್ವಯ ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಪರಿಗಣಿಸಬಹುದಾದ ಅರ್ಜಿಗಳಾಗಿದ್ದು, ಗುತ್ತಿಗೆ ಮಂಜೂರಾತಿಗೆ ಸರ್ಕಾರದ ಅನುಮೋದನೆ ಕೋರಿ ಸಲ್ಲಿಸಿದ ಪ್ರಸ್ತಾವನೆಗಳು ಪರಿಶೀಲನೆಯಲ್ಲಿದೆ.<br>ಪಟ್ಟಾ ಜಮೀನುಗಳಲ್ಲಿ ಲಭ್ಯವಿರುವ ಖನಿಜವನ್ನು ತೆಗೆಯಲು ಪಟ್ಟಾದಾರರಿಗೆ ಅಥವಾ ಪಟ್ಟಾದಾರರು ಒಪ್ಪಿಗೆ ನೀಡುವ ವ್ಯಕ್ತಿಗಳಿಗೆ ಕಲ್ಲುಗಣಿಗಾರಿಕೆಗೆ ಲೈಸೆನ್ಸ್ ನೀಡಲಾಗುತ್ತಿದೆ.<br>ಜಿಲ್ಲಾ ವ್ಯಾಪ್ತಿಯಲ್ಲಿ ಪಟ್ಟಾ ಜಮೀನಿನಲ್ಲಿ ಲಭ್ಯವಿರುವ ಉಪಖನಿಜವನ್ನು ತೆಗೆಯಲು 11 ಅರ್ಜಿಗಳು ಸ್ವೀಕೃತವಾಗಿದ್ದು, ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಅಗತ್ಯವಿರುವ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರ ಕೋರಿದ್ದು, ವಿಲೇವಾರಿಗೆ ಬಾಕಿ ಇರುತ್ತವೆ.<br>ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು-1994ರ ನಿಯಮ-31-ZC ರಂತೆ ಎಂ-ಸ್ಯಾಂಡ್ ತಯಾರಿಸುವ ಉದ್ದೇಶಕ್ಕಾಗಿ ಕಲ್ಲುಗಣಿ ಗುತ್ತಿಗೆ ಕೋರಿ 15 ಅರ್ಜಿಗಳು ಸ್ವೀಕೃತವಾಗಿದ್ದು, ಈ ಪೈಕಿ 03 ಅರ್ಜಿಗಳ ಪ್ರದೇಶಕ್ಕೆ ಕಲ್ಲುಗಣಿ ಗುತ್ತಿಗೆ ಮಂಜೂರಾತಿ ನೀಡಲಾಗಿದ್ದು, 04 ಅರ್ಜಿಗಳನ್ನು ತಿರಸ್ಕರಿಸಿದ್ದು, 08 ಅರ್ಜಿಗಳು ವಿಲೇವಾರಿಗೆ ಬಾಕಿ ಇರುತ್ತವೆ. |

ಸಂಖ್ಯೆ: ಸಿಐ 456 ಎಂಎಂಎಸ್ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು
ಸಿ.ಸಿ. ಪಾಟೀಲ
ಗಣಿ ಮತ್ತು ಭೂವಿಜ್ಞಾನ ಸಚಿವರು